# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1317 |
| ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 24.12.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ "ಸಿರಿಧಾನ್ಯ ಕೃಷಿ" ಬೆಳೆಗಳನ್ನು ಬೆಳೆಸಿ-ಸಂಸ್ಕರಿಸಿ ಬಳಸುವ ಸಹಜವೆ ಸಂಸ್ಕರಣೆಯ ಹಂತದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ "ಸಿರಿಧಾನ್ಯ ಕೃಷಿ" ಧಾನ್ಯಗಳ ಬಳಕೆ ಮತ್ತು ಸಂಸ್ಕರಣೆಗೆ ಇರುವ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಅಗತ್ಯ ಕ್ರಮಗಳೇನು; | ರಾಜ್ಯದಲ್ಲಿ ಪೌಷ್ಟಿಕ ಭರಿತ ಸಿರಿಧಾನ್ಯಗಳ ಬಳಕೆಯನ್ನು ಉತ್ತೇಜಿಸಲು ತಾಲ್ಲೂಕು/ ಜಿಲ್ಲಾ/ ರಾಜ್ಯ/ ರಾಷ್ಟ್ರೀಯ/ ಅಂತರರಾಷ್ಟ್ರೀಯ ಮಟ್ಟದಲ್ಲಿ ಕಾರ್ಯಗಾರ/ ಸಮಾವೇಶ/ ವಸ್ತು ಪ್ರದರ್ಶನ/ ಮೇಳಗಳನ್ನು ಆಯೋಜಿಸಿ ಸಿರಿಧಾನ್ಯ ಬೆಳೆದ ರೈತರು ಮತ್ತು ಸಾವಯವ ಚಿಲ್ಲರೆ ವ್ಯಾಪಾರಿಗಳು/ ಸಗಟು ವ್ಯಾಪಾರಿಗಳು/ಸಂಸ್ಕರಣೆದಾರರ ಮಧ್ಯೆ ಸಂಪರ್ಕ ಬೆಳೆಸಲು ಕ್ರಮ ಕೈಗೊಳ್ಳಲಾಗಿದೆ. ಅಲ್ಲದೇ, ಆಹಾರ ತಜ್ಞರು, ಪೌಷ್ಟಿಕ ತಜ್ಞರು, ಫಿಟ್ ನೆಸ್ ಮತ್ತು ಆಹಾರ ಬ್ಲಾಗರ್‌ಗಳು, ಬಾಣಸಿಗರು ಮತ್ತು ಹೋಟೆಲ್ ಉದ್ಯಮಿಗಳ ಸಂಘಗಳು/ ಕೇಟರಿಂಗ್ ಸಂಘಗಳು, ಇಂಡಸ್ಟ್ರಿ ಲೀಡರ್ಸ್ ಕನ್ಸೋರ್ಟಿಯಮ್, ಇನ್ನಿತರೆ ಸಂಘ ಸಂಸ್ಥೆಗಳಿಗೆ ಕಾರ್ಯಾಗಾರಗಳನ್ನು ಆಯೋಜಿಸಿ ಸಿರಿಧಾನ್ಯ ಸೇವನೆಯನ್ನು ಜನಪ್ರಿಯಗೊಳಿಸುವ ನಿಟ್ಟಿನಲ್ಲಿ ಹೆಚ್ಚಿನ ಪ್ರಚಾರವನ್ನು ಕೈಗೊಳ್ಳಲಾಗಿದೆ. |
| ಇ) | ತಜ್ಞರ/ವೈದ್ಯರು ಮೂಡಿಸಿದ ಅರಿವಿನಿಂದ ಸಾರ್ವಜನಿಕರಲ್ಲಿ ಆರೋಗ್ಯ ಕಾಳಜಿ ಹೆಚ್ಚಾಗುತ್ತಾ ಸಿರಿಧಾನ್ಯಗಳ ಬಳಕೆಯು ಹೆಚ್ಚುತ್ತಿದ್ದು, ಸಿರಿಧಾನ್ಯಗಳ ಉತ್ಪಾದನೆಗೆ ತಕ್ಕಂತೆ ಮಾರುಕಟ್ಟೆ ಸೌಲಭ್ಯ ಹಾಗೂ ರೈತಸ್ನೇಹಿ ಸಂಸ್ಕರಣಾ ಯಂತ್ರಗಳ ಪೂರೈಕೆ ಮಾಡಲು ಏನು ಕ್ರಮಗಳನ್ನು ಕೈಗೊಂಡಿದೆ; | ಮುಂದುವರೆದು, ಸಿರಿಧಾನ್ಯಗಳ ಸಂಸ್ಕರಣೆಗೆ ಇರುವ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ 2019-20ನೇ ಸಾಲಿನ ಆಯವ್ಯಯ ಘೋಷಣಾ ಕಾರ್ಯಕ್ರಮವಾದ ಸಾವಯವ ಕೃಷಿ, ಸಿರಿಧಾನ್ಯ ಮತ್ತು ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ ಉತ್ಪನ್ನಗಳ ಸಂಸ್ಕರಣೆಗೆ ಉತ್ತೇಜನ ಯೋಜನೆಯಡಿ ಉತ್ಪನ್ನಗಳ ಸಂಸ್ಕರಣೆ, ವರ್ಗೀಕರಣ, ಮೌಲ್ಯವರ್ಧನೆ, ಪ್ಯಾಕಿಂಗ್ ಮತ್ತು ಬ್ರಾಂಡಿಂಗ್ ಘಟಕಗಳಿಗೆ ಶೇ.50 ಅಥವಾ ಗರಿಷ್ಟ ರೂ.10.00ಲಕ್ಷಗಳ ವರೆಗೆ ಸಹಾಯಧನ ಒದಗಿಸುವ ಯೋಜನೆಯನ್ನು ಜಾರಿಗೊಳಿಸಲಾಗಿದ್ದು ಇದರಡಿ ರೈತರು/ರೈತ ಗುಂಪುಗಳು/ರೈತ ಉತ್ಪಾದಕಾ ಗುಂಪುಗಳು/ ನವೋದ್ಯಮಿಗಳು/ ಸಾರ್ವಜನಿಕ ಉದ್ದಿಮೆಗಳು ಪ್ರಯೋಜನ ಪಡೆದಿರುತ್ತಾರೆ. ಈ ಯೋಜನೆಯಡಿ ಸಿರಿಧಾನ್ಯಗಳ ಸಂಸ್ಕರಣಾ ಘಟಕಗಳಿಗೂ ಸಹ ಸಹಾಯಧನವನ್ನು ವಿತರಿಸಲಾಗಿದೆ. |

| | | |
|---|---|---|
| | | ಅಲ್ಲದೇ, ಈ ಹಿಂದೆ ಕೃಷಿ ಇಲಾಖೆಯ ಸಹಯೋಗ (facilitate) ದೊಂದಿಗೆ ರಾಜ್ಯದಲ್ಲಿ ರಚಿತಗೊಂಡಿರುವ 15 ಪ್ರಾಂತೀಯ ಸಹಕಾರ ಸಾವಯವ ಕೃಷಿಕರ ಸಂಘಗಳ ಒಕ್ಕೂಟಗಳ ಪೈಕಿ 9 ಪ್ರಾಂತೀಯ ಒಕ್ಕೂಟಗಳಿಗೆ ಸಿರಿಧಾನ್ಯಗಳ ಸಂಸ್ಕರಣೆ ಹಾಗೂ ಮಾರುಕಟ್ಟೆ ಸಂಬಂಧದ ಘಟಕಗಳ ಅನುಷ್ಠಾನಕ್ಕೆ ಇಲಾಖಾವತಿಯಿಂದ ಸಹಾಯಧನ ನೀಡಲಾಗಿರುತ್ತದೆ.<br>ಪ್ರಸಕ್ತ ಸಾಲಿನಲ್ಲಿ ಕೇಂದ್ರ ಸರ್ಕಾರದ ಆರ್.ಕೆ.ವಿ.ವೈ - ರೈತಸಿರಿ ಯೋಜನೆಯಡಿ ಸಿರಿಧಾನ್ಯಗಳ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ರೈತರು/ರೈತ ಗುಂಪು/ಕೃಷಿ ಉದ್ಯಮಿಗಳು/ಸ್ಟಾರ್ಟ್ ಅಪ್‌ಗಳಿಗೆ (ಎಂಡ್ ಟು ಎಂಡ್ ಯಂತ್ರೋಪಕರಣಗಳ ಸ್ಥಾಪನೆಗೆ ಮಾತ್ರ) ಶೇ. 50 ಅಥವಾ ಗರಿಷ್ಟ ರೂ.10.00 ಲಕ್ಷಗಳವರೆಗೆ ಸಹಾಯಧನ ಒದಗಿಸಲು ಅವಕಾಶ ಕಲ್ಪಿಸಲಾಗಿದ್ದು, ಪ್ರಸ್ತುತ ಪ್ರಸ್ತಾವನೆಗಳನ್ನು ಆಹ್ವಾನಿಸಲಾಗುತ್ತಿದೆ. |
| ಈ) | ರಾಜ್ಯದಲ್ಲಿ ಎಷ್ಟು ಸಿರಿಧಾನ್ಯ ಸಂಸ್ಕರಣಾ ಘಟಕಗಳು ಲಭ್ಯವಿದೆ; ಇವುಗಳಲ್ಲಿ ಸರ್ಕಾರ ಮತ್ತು ಕೃಷಿ ವಿಶ್ವವಿದ್ಯಾಲಯದ ಸಹಯೋಗದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಘಟಕಗಳೆಷ್ಟು; ಹಾಗೂ ಖಾಸಗಿಯಾಗಿ ಕಾರ್ಯನಿರ್ವಹಿಸುತ್ತಿರುವ ಘಟಕಗಳೆಷ್ಟು; | ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಿಂದ 7 ಸಿರಿಧಾನ್ಯ ಸಂಸ್ಕರಣಾ ಘಟಕಗಳಿಗೆ ಪ್ರೋತ್ಸಾಹ ಮತ್ತು ರಿಯಾಯಿತಿಯನ್ನು ನೀಡಲಾಗಿದೆ. ಘಟಕಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. |
| ಉ) | ರೈತರಿಗೆ ಸಿರಿಧಾನ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುವಂತೆ ಉತ್ತೇಜನ ನೀಡುವ ನಿಟ್ಟಿನಲ್ಲಿ ಸರ್ಕಾರ ಯಾವ ಯೋಜನೆಗಳನ್ನು ಹಮ್ಮಿಕೊಂಡಿದೆ; ಯೋಜನೆಗಳ ಅನುಷ್ಠಾನ ಯಾವ ಹಂತದಲ್ಲಿವೇ (ವಿವರ ನೀಡುವುದು) | ರಾಜ್ಯದ ಸಿರಿಧಾನ್ಯ ಪ್ರದೇಶವನ್ನು ವಿಸ್ತರಿಸುವ ನಿಟ್ಟಿನಲ್ಲಿ 2019-20 ನೇ ಸಾಲಿನ ಆಯವ್ಯಯ ಘೋಷಣಾ ಕಾರ್ಯಕ್ರಮವಾಗಿ ರೈತ ಸಿರಿ ಯೋಜನೆಯನ್ನು ಜಾರಿಗೆ ತಂದು ಸಾವಯವ ಮತ್ತು ಸಾಂಪ್ರದಾಯಿಕವಾಗಿ ಬೆಳೆಯುವ ಸಿರಿಧಾನ್ಯಗಳಾದ ನವಣೆ, ಹಾರಕ ಸಾಮೆ, ಕೊರಲೆ, ಬರಗು ಮತ್ತು ಊದಲು ಬೆಳೆಗಳನ್ನು ಬೆಳೆಯುವ ರೈತರಿಗೆ ಪ್ರತೀ ಹೆಕ್ಟೇರ್ ಗೆ ರೂ.10000/-ಗಳಂತೆ ಗರಿಷ್ಠ ಎರಡು ಹೆಕ್ಟೇರ್‌ಗೆ ಮಾತ್ರ ಸೀಮಿತವಾಗುವಂತೆ DBT ಮೂಲಕ ಪ್ರೋತ್ಸಾಹಧನ ನೀಡಲಾಗುತ್ತಿದ್ದು, ಸದರಿ ಯೋಜನೆಯನ್ನು 2021-22ನೇ ಸಾಲಿಗೆ ಮುಂದುವರೆಸಲಾಗಿದ್ದು, ಪ್ರಸ್ತುತ ಸಿರಿಧಾನ್ಯಗಳನ್ನು ಬೆಳೆದ ರೈತರುಗಳಿಗೆ 2021-22ನೇ ಸಾಲಿನ ಬೆಳೆ ಸಮೀಕ್ಷೆ ಆಧಾರದ ಮೇರೆಗೆ DBT ಮುಖಾಂತರ ಪ್ರೋತ್ಸಾಹಧನ ಪಾವತಿಸಲಾಗುತ್ತಿದೆ. |
| ಊ) | ಅಪೌಷ್ಟಿಕತೆ ನಿವಾರಣೆ ದೃಷ್ಟಿಯಿಂದ ಸಿರಿಧಾನ್ಯಗಳನ್ನು ರಾಜ್ಯದ ಪಡಿತರ ಮತ್ತು ಬಿಸಿಯೂಟದಲ್ಲಿ ಸೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಪೌಷ್ಟಿಕಾಂಶಯುಕ್ತ ಸಿರಿಧಾನ್ಯಗಳನ್ನು ಸರ್ಕಾರದ ಯೋಜನೆಗಳಡಿ ಪರಿಚಯಿಸಲು ಪ್ರಸ್ತುತ ಪ್ರಯತ್ನಗಳು ನಡೆಯುತ್ತಿವೆ. |

ಸಂಖ್ಯೆ: AGRI-ACT/192/ 2021

(ಬಿ.ಸಿ. ಪಾಟೀಲ್)

ಕೃಷಿ ಸಚಿವರು

ಅನುಬಂಧ- 1

| # | DISTRICT | NAME AND ADDRESS OF THE UNIT | END PRODUCT/ ACTIVITY |
|---|---|---|---|
| 1 | TUMKUR | BANASHANKARI SRI DHANAYA SAMSKARANA GATAKA, BANASHANKARI BADAVANE, C.N. HALLI TALUK, TUMAKURU DISTRICT PROPSRI C.R. RANGAIAH | MILLIETS PROCESSING AND FLOURING OF FOOD GRAINS |
| 2 | DAVANAGERE | JASS FOOD TECH, # 241/B, R.S. NO.12/2C1 KARIGANURU CROSS,DAVANAGERE | ORGANIC MILLETS FOOD PRODUCTS |
| 3 | DAVANAGERE | SANNIDHI AGRO INDUSTRIES, # 1004/A , K R ROAD, DAVANAGERE (T) & (D). PARTNER: SMT. SHOBHA S | ORGANIC MILLETS FOOD PRODUCTS |
| 4 | DAVANAGERE | TEJASWINI AGRI SERVICES,#98/1A,SY NO: 12/1A2 , MITTALAKATTE, HARIHARA (T), DAVANAGERE(D). | ORGANIC MILLET PROCESSING |
| 5 | CHIKKAMAGLUR | ORGANIC ENERGY FOODS, SY.NO.27/2, LAKSHMISAGARA, DEVANOOR POST, KADUR TQ. PROP: S.M. MANJUNATHA | MILLET PROCESSING |
| 6 | DAVANAGERE | KRUSHIKA AGRO FOOD PROCESSING CORPORATION, # A C ROAD, KENCHANAHALLIVILLAGE,JAGALURU (T) DAVANAGERE, (D). | ORGANIC MILLET PROCESSING |
| 7 | DAVANAGERE | VRUSHABA AGRO FOOD PROCESSING CORPORATION , SY.NO: 100/4, BIDARAKERE VILLAGE, JAGALURU (T), DAVANAGERE (D) | ORGANIC MILLET PROCESSING |